# Understanding Learning at the Primary Level

# ಪ್ರಾಥಮಿಕ ಹಂತದ ಕಲಿಕೆಯನ್ನು ಅರ್ಥಮಾಡಿಕೊಳ್ಳುವುದು

**ಆರ್. ಅಮೃತವಲ್ಲಿ**

***

*"ವಾಕ್ಯರಚನೆಯು, ನಾನು ಬೋಧಕರಿಂದ 'ಕಲಿತೆ' ಎಂಬುದನ್ನು ನೆನಪಿಸುತ್ತದೆ; ಆದರೆ ಪುಸ್ತಕಗಳಿಂದ (ನಿಯೋಜಿತ ಕಾರ್ಯದಿಂದ) 'ನಾನು ನಾನು ಕಲಿಯುತ್ತೇನೆ" -* ***ಎಲ್.ಸಿ. ಟೇಯ್ಲರ್***

ಪ್ರಾಥಮಿಕ ಹಂತದಲ್ಲಿನ ಶಿಕ್ಷಕರು ವಿಷಯ ಪರಿಣಿತರಾಗಿಲ್ಲದಿರಬಹುದು, ಆದರೆ ಅವರು ಎರಡು ವಿಷಯಗಳಲ್ಲಿ ಪರಿಣಿತರಾಗಿರುವುದು ಅತ್ಯಗತ್ಯ: ಕಲಿಯುವುದು ಎನ್ನುವುದರ ಅರ್ಥವೇನು ಮತ್ತು ಮಗುವಾಗುವುದು ಎಂದರೆ ಏನು ಎಂಬುದನ್ನು ಶಿಕ್ಷಕರು ಅರ್ಥಮಾಡಿಕೊಳ್ಳಬೇಕು. ಈ ಎರಡು ವಿಷಯಗಳ ಕುರಿತು ನನ್ನ ಕೆಲವು ಗ್ರಹಿಕೆಗಳನ್ನು ಈ ಲೇಖನದಲ್ಲಿ ನಾನು ಹಂಚಿಕೊಳ್ಳಲು ಇಚ್ಚಿಸುತ್ತೇನೆ. ನಮ್ಮ ತರಗತಿಗಳಲ್ಲಿ ಕಲಿಕೆಯನ್ನು (ಭಾಷಾ ಕಲಿಕೆಯನ್ನೂ ಒಳಗೊಂಡಂತೆ) ಉಂಟುಮಾಡುವುದು ಹೇಗೆ ಎನ್ನುವ ಪ್ರಶ್ನೆಗೆ ಉತ್ತರಿಸುವ ಪ್ರಯತ್ನ ಮಾಡುತ್ತೇನೆ.

ಮಗುವನ್ನು "ಕಿರು-ವಯಸ್ಕ"ನನ್ನಾಗಿ ಅಥವಾ 'ಅಪರಿಪೂರ್ಣ ಯುವಕ'ನನ್ನಾಗಿ ನೋಡುವ ಕಾಲವೊಂದಿತ್ತು. ಇದಕ್ಕೆ ಸಂಪೂರ್ಣ ವ್ಯತಿರಿಕ್ತವಾಗಿ ಸಹಜವಾಗಿ ಮತ್ತು ಯಾವುದೇ ನಿರ್ಬಂಧಗಳ ಗೊಡವೆಯಿಲ್ಲದೆ ಜಗತ್ತಿನೊಂದಿಗೆ ಪ್ರತಿಕ್ರಿಯಿಸುವ ಸ್ವಚ್ಛಂದ ಉತ್ಸಾಹದ ಕಾರಣದಿಂದ ಮಗುವನ್ನು "ಮನುಷ್ಯನ ತಂದೆ"(ಫಾದರ್ ಆಫ್ ಮ್ಯಾನ್) ಎಂದು ಕರೆಯುವ ರೊಮ್ಯಾಂಟಿಕ್ ದೃಷ್ಟಿಕೋನವೂ ಇದೆ. ಇದು ಪಿಕಾಸೋ ನಂತಹ ಮಹಾನ್ ಕಲಾವಿದರು ಬಯಸುತ್ತಿದ್ದಂತಹ ಮಾನಸಿಕ ಸ್ಥಿತಿ ಎನ್ನಬಹುದು.

ಇನ್ನು ಶಾಲಾ ಕೊಠಡಿಯ ಮಟ್ಟಿಗೆ ಚರ್ಚಿಸುವುದಾದರೆ , ಮೊದಲನೆಯ ದೃಷ್ಟಿಯಂತೆ ವಯಸ್ಕರು ತಮಗೆ ಗೊತ್ತಿರುವಷ್ಟನ್ನು ಮಕ್ಕಳಿಗೆ ಬೋಧಿಸಲು ಪ್ರಯತ್ನಿಸುತ್ತಾರೆ. ವಯಸ್ಕರು ತಮ್ಮಲ್ಲಿ ಸಂಗ್ರಹಿಸಿಕೊಂಡ ಜ್ಞಾನವನ್ನು ಆದಷ್ಟು ಬೇಗ ಹಾಗೂ ಎಷ್ಟು ದೊಡ್ಡ ಪ್ರಮಾಣದಲ್ಲಿ ಸಾಧ್ಯವೋ ಅಷ್ಟು ದೊಡ್ಡ ಪ್ರಮಾಣದಲ್ಲಿ ಮಗುವಿನ ಮನಸ್ಸಿಗೆ ತುಂಬಲು ಪ್ರಯತ್ನಿಸಲಾಗುತ್ತದೆ. ಇದರಲ್ಲಿ ಕಲಿಕೆ ಎಂದರೆ ವಯಸ್ಕರಿಗೆ ಗೊತ್ತಿರುವುದನ್ನು ಕಲಿಯುವುದು. ಎರಡನೆಯ ದೃಷ್ಟಿಕೋನದಂತೆ, ಜೀನ್ ಪಿಯಾಜೆ ಮತ್ತು ಮರಿಯಾ ಮಾಂಟೆಸೊರಿ ಮತ್ತಿತರರು ಪ್ರತಿಪಾದಿಸುವಂತೆ ಮಗುವಿಗೆ ತನ್ನದೇ ಆದ ಪರಿಕಲ್ಪನೆಗಳಿದ್ದು, ಅದರ ಗ್ರಹಿಕೆ ತನ್ನದೇ ಕಾಲಗತಿಯಲ್ಲಿ ಬೆಳೆಯುತ್ತಾ ಹೋಗುತ್ತದೆ. ಕಲಿಕೆ ಎಂದರೆ ಮಗುವಿನ ಮಾನಸಿಕ ಚಟುವಟಿಕೆ: ಅದು ಮಗುವಿನ ಚಿಂತನೆಯ ರೀತಿಯಲ್ಲಿ ಆಗುವ ಬದಲಾವಣೆ. ಇದರ ಅರ್ಥವನ್ನು ಮತ್ತಷ್ಟು ಸ್ಪಷ್ಟವಾಗಿ ಗ್ರಹಿಸಲು ಕೆಲವು ನಿಜ ಜೀವನದ ನಿದರ್ಶನಗಳನ್ನು ಗಮನಿಸೋಣ.

ಪ್ರಾಥಮಿಕ ಶಾಲಾ ಇಂಗ್ಲಿಷ್ ಶಿಕ್ಷಕಿಯೊಬ್ಬರು ತಮ್ಮ ಕೈಗಳನ್ನು ತೋರಿಸುತ್ತಾ "ನನಗೆ ಎರಡು ಕೈಗಳು ಹಾಗೂ ಹತ್ತು ಬೆರಳುಗಳಿವೆ" ಎಂದು ಹೇಳುತ್ತಾರೆ. ತಾನು ಹೇಳಿದ್ದನ್ನು ಮಕ್ಕಳು ಪುನರುಚ್ಚರಿಸಬೇಕು ಎಂಬುದು ಆಕೆಯ ಉದ್ದೇಶ ಇದ್ದಂತಿತ್ತು. ಆಕೆ ಹೇಳಿ ಮುಗಿಸುವಷ್ಟರಲ್ಲೇ ಒಂದು ಮಗು ಉತ್ಸಾಹದಿಂದ "ನನಗೂ ಅಷ್ಟೇ ಇವೆ" ಎಂದು ಕೂಗಿದಾಗ ಆ ಮಗುವನ್ನು ಶಿಕ್ಷಿಸಲಾಯಿತು. ಶಿಕ್ಷಕಿ ಮಗುವಿನ ಮೇಲೆ ಅಸಮಾಧಾನಗೊಂಡದ್ದು ಏಕೆ? ಮಗುವಿನ ಪ್ರತಿಕ್ರಿಯೆಯನ್ನು ಆಧರಿಸಿ ನಾವು ಮಗು ಏನನ್ನಾದರೂ ಕಲಿಯುತ್ತಿತ್ತು ಎಂದು ಹೇಳಬಹುದೇ? ವಾಸ್ತವದಲ್ಲಿ ಶಿಕ್ಷಕಿ ಬೋಧಿಸಲು ಪ್ರಯತ್ನಿಸುತ್ತಿರುವುದನ್ನು ಮಗು ಈಗಾಗಲೇ ಕಲಿತಿತ್ತೇ? ಶಿಕ್ಷಕಿ ಏನನ್ನು ಬೋಧಿಸಲು ಪ್ರಯತ್ನಿಸುತ್ತಿದ್ದರು?

ತರಗತಿಯಲ್ಲಿ ಯಾವುದೋ ರೀತಿಯ ವಿಫಲತೆಗೆ ನೀಡಲಾಗುವ ಶಿಕ್ಷೆಯಂತೆ ಒಂದು ಮಗುವನ್ನುಶಾಲಾ ಅವಧಿಯ ನಂತರವೂ ಶಾಲೆಯಲ್ಲಿಯೇ ಉಳಿಸಿಕೊಳ್ಳಲಾಗುತ್ತದೆ. ಹೀಗೆ ಮೂರು ನಾಲ್ಕು ಬಾರಿ ಆದ ನಂತರ ಒಮ್ಮೆ ಆ ಮಗುವಿನ ತಾಯಿ ಈ ದಿನ ಏನು ಸಮಸ್ಯೆಯಾಯಿತು ಎಂದು ಮಗುವನ್ನು ಕೇಳುತ್ತಾಳೆ. ಮಗು, "ಅಮ್ಮಾ, ಹೊಟ್ಟೆ ನೋವು (stomach pain) ಮತ್ತು ಕಾಲು ನೋವು (leg pain) ಅಂದರೆ ಏನೆಂದು ನನಗೆ ಅರ್ಥವಾಗುತ್ತದೆ. ಆದರೆ ಕಿಟಕಿ ನೋವು (window pane) ಅಂದರೆ ಏನೆಂದು ನನಗೆ ಅರ್ಥವಾಗುವುದಿಲ್ಲ" ಎನ್ನುತ್ತದೆ. ಈ ತಾಯಿ ತನ್ನ ಮಗುವನ್ನು ಆ ಶಾಲೆಯಿಂದ ಹೊರಗೆ ಕರೆತಂದು ತಾನೇ ಶಾಲೆಯೊಂದನ್ನು ಆರಂಭಿಸುತ್ತಾಳೆ. ಅದು ಇಂದು ಹೈದರಾಬಾದ್ ನ ಪ್ರತಿಷ್ಠಿತ ಶಾಲೆಗಳಲ್ಲಿ ಒಂದಾಗಿದೆ. ಇಲ್ಲಿ ನಾನು ಶಾಂತಾ ರಾಮೇಶ್ವರ ರಾವ್ ಮತ್ತು ವಿದ್ಯಾರಣ್ಯ ಪ್ರೌಢಶಾಲೆಯನ್ನು ಉಲ್ಲೇಖಿಸುತ್ತಿದ್ದೇನೆ. ಇದೇ ರೀತಿಯ ಮತ್ತೊಂದು ನಿದರ್ಶನವನ್ನು ಮೈಕೆಲ್ ಹೋವ್ ರವರು 'ಎ ಟೀಚರ್ಸ್ ಗೈಡ್ ಟು ಸೈಕಾಲಜಿ ಆಫ್ ಲರ್ನಿಂಗ್' (ಶಿಕ್ಷಕರಿಗೊಂದು ಕಲಿಕಾ ಮನಃಶಾಸ್ತ್ರದ ಮಾರ್ಗದರ್ಶಿ) ಎಂಬ ತಮ್ಮ ಪುಸ್ತಕದಲ್ಲಿ ಸಾಂದರ್ಭಿಕವಾಗಿ ಹೇಳಿದ್ದಾರೆ. ಪುಟ್ಟ ಜಾನಿಗೆ ಅವನ ಶಿಕ್ಷಕಿ "ಸಿಟ್ ಹಿಯರ್ ಫಾರ್ ದ ಪ್ರೆಸೆಂಟ್" (ಸದ್ಯಕ್ಕೆ ಇಲ್ಲಿ ಕುಳಿತುಕೋ) ಎಂದು ಹೇಳುತ್ತಾರೆ. ಶಿಕ್ಷಕರು ತನಗೆ ಉಡುಗೊರೆಯನ್ನು ಕೊಡಲಿಲ್ಲ! (The teacher didn't give him a present!) ಎಂದು ಬೇಸರ ಪಟ್ಟುಕೊಂಡು ಜಾನಿ ಮನೆಗೆ ಹಿಂದಿರುಗುತ್ತಾನೆ. (present ಪದಕ್ಕೆ 'ಈಗ', 'ಪ್ರಸ್ತುತ', 'ಸದ್ಯ', 'ಉಡುಗೊರೆ' ಎಂಬ ವಿಭಿನ್ನ ಅರ್ಥಗಳಿವೆ; ಅದೇ ರೀತಿ ಇಂಗ್ಲೀಷಿನಲ್ಲಿ pain ಮತ್ತು pane ಎಂಬ ಪದಗಳ ಉಚ್ಚಾರಣೆ ಮತ್ತು ಕಾಗುಣಿತ ಒಂದೇ ಆದರೂ ಅರ್ಥದಲ್ಲಿ ವ್ಯತ್ಯಾಸವಿದೆ).

ಕಲಿಕೆಯನ್ನು ಮಾನಸಿಕ ಚಟುವಟಿಕೆ ಎಂದು ನಾವು ಅಂದುಕೊಂಡರೆ, ಅಂದರೆ ನಾವು ಮಗುವಿಗೆ ಬರೆ ಅಥವಾ ಓದು ಎಂದು ಹೇಳಿ ಏನನ್ನು ಕಲಿಸಲು ಯತ್ನಿಸುತ್ತೇವೋ ಅದನ್ನು ಲಕ್ಷಿಸುವುದರ ಬದಲಾಗಿ ಕಲಿಕೆ ಎಂಬುದು ಮಗುವಿನ ಮನಸ್ಸಿನಲ್ಲಿ ಸಂಭವಿಸುವ ಒಂದು ಕ್ರಿಯೆ ಎಂದುಕೊಂಡರೆ ಶಿಕ್ಷಕರು ಮತ್ತು ಮಗುವಿನ ನಡುವಿನ ಗ್ರಹಿಕೆಯಲ್ಲಿ ನೈಜ ಸಮಸ್ಯೆಗಳಿರಬಹುದು ಎಂಬುದನ್ನು ನಾವು ಪರಿಗಣಿಸಬೇಕಾಗುತ್ತದೆ, ಅದನ್ನು ಶಿಕ್ಷಕರೂ ಗಮನಿಸಬೇಕಾಗುತ್ತದೆ (window pain, the present). ನೀವು ಏನನ್ನು ಕಲಿಸಲು ಪ್ರಯತ್ನಿಸುತ್ತಿರುವಿರೋ ಅದನ್ನೇ ಮಗು ಯಾವಾಗಲೂ ಕಲಿಯದಿರಬಹುದು (ನಾನೂ ಸಹ). ಹಾಗಾಗಿ ಎಲ್ಲ ಮಕ್ಕಳೂ ಒಂದು ವಿಷಯವನ್ನು ಒಂದೇ ಸಮಯದಲ್ಲಿ ಕಲಿಯದಿರಬಹುದು.

ಪ್ರಾಥಮಿಕ ಶಾಲಾ ಹಂತದಲ್ಲಿ ಈ ಕೊನೆಯ ಅಂಶ ಸತ್ಯವಾಗಿದೆ, ಅದರಲ್ಲೂ ಭಾಷೆಯಂತಹ ವಿಷಯಗಳ ಮಟ್ಟಿಗೆ ಸತ್ಯವಾಗಿದೆ. ಭೌತಶಾಸ್ತ್ರ ಅಥವಾ ಬೀಜಗಣಿತದಂತಹ ವಿಷಯಗಳ ಹಾಗೆ ಭಾಷೆಯನ್ನು ಮಕ್ಕಳಿಗೆ ಕಲಿಸಲು ಬರುವುದಿಲ್ಲ. ಭಾಷೆಯೆಂಬುದು ಮಕ್ಕಳೊಳಗೆ ಕೆಲವು ಸಂದರ್ಭ ಸನ್ನಿವೇಶಗಳಲ್ಲಿ ಬೆಳೆಯುವಂತಹ ವಿಷಯವಾಗಿದೆ. ಎಲ್ಲ ಮಕ್ಕಳೂ ದೈಹಿಕವಾಗಿ ಬೆಳೆದು ದೊಡ್ಡವರಾಗುವಂತೆ ಮಾನಸಿಕವಾಗಿಯೂ ಬೆಳೆಯುತ್ತಾರೆಂದು ನಿರೀಕ್ಷಿಸಲಾಗದು. ದೈಹಿಕ ಬೆಳವಣಿಗೆಗೆ ನಾವು ಪೋಷಣೆ, ಪ್ರೋತ್ಸಾಹ ನೀಡಬಹುದಷ್ಟೇ;

ಅದನ್ನು ಹೊರಗಿನಿಂದಬಲವಂತವಾಗಿ ಸಾಧಿಸುವುದು (ಮಗು ಎತ್ತರವಾಗಿ ಕಾಣುವಂತೆ ಮಾಡುವುದು) ಸಾಧ್ಯವಿಲ್ಲ. ಅದೇ ರೀತಿ ಮಗುವಿನ ಮಾನಸಿಕ ಬೆಳವಣಿಗೆಯನ್ನು ಹೊರಗಿನಿಂದ ಬಲವಂತವಾಗಿ (ಶಿಕ್ಷಕರನ್ನು ಅನುಕರಿಸುವುದು, ಪುಸ್ತಕದಿಂದ ವಾಚಿಸುವುದು, ಕಪ್ಪುಹಲಗೆಯಿಂದ ನಕಲು ಮಾಡುವುದು…ಮುಂತಾದ ಚಟುವಟಿಕೆಗಳಿಂದ) ಸಾಧಿಸುವುದು ಸಹ ಸಾಧ್ಯವಿಲ್ಲ. ಆರಂಭಿಕ ಮಾನಸಿಕ ಬೆಳವಣಿಗೆಯು ಆರಂಭಿಕ ದೈಹಿಕ ಬೆಳವಣಿಗೆಯ ಹಾಗೆಯೇ ಸಾರ್ವತ್ರಿಕವಾದದ್ದು: ಎಲ್ಲ ಮಕ್ಕಳೂ ಬೆಳೆಯುತ್ತಾರೆ. ಬೆಳವಣಿಗೆ ಪೂರ್ತಿಯಾದ ಮೇಲೆ ಅವರ ಎತ್ತರಗಳಲ್ಲಿ ವ್ಯತ್ಯಾಸಗಳಿರಬಹುದು. ಆದರೆ ಬೆಳವಣಿಗೆಯ ವರ್ಷಗಳಲ್ಲಿ ಯಾರು ಎಷ್ಟು ಬೆಳೆಯುತ್ತಾರೆಂದು ನಮಗೆ ಗೊತ್ತಿರುವುದಿಲ್ಲ; ನಾವು ಕೇವಲ ಅವರು ಬೆಳೆಯಲು ಸಹಾಯ ಮಾಡುತ್ತೇವೆ, ಅಷ್ಟೇ. ಆದ್ದರಿಂದ ಆರಂಭಿಕ ಮಾನಸಿಕ ಬೆಳವಣಿಗೆಯು ಮಕ್ಕಳ ನಡುವಿನ ಸಾಮರ್ಥ್ಯ, ಬುದ್ಧಿಶಕ್ತಿ ಮತ್ತಿತರ ಅಂಶಗಳ ಆಧಾರದ ಮೇಲೆ ಹೆಚ್ಚೇನೂ ವ್ಯತ್ಯಾಸವನ್ನು ಉಂಟುಮಾಡುವುದಿಲ್ಲ. ಪ್ರತಿಯೊಂದು ಮಗುವಿಗೂ ಎಷ್ಟು ಕಲಿಯಲು ಸಾಧ್ಯವೋ ಅಷ್ಟನ್ನು ಕಲಿಯಲು ಅವಕಾಶ ಮಾಡಿಕೊಡಬೇಕು. ನಂತರ ಪ್ರೌಢಶಾಲೆಯಲ್ಲಿ ಮಾತ್ರ ನಿರ್ದಿಷ್ಟ ವಿಷಯಗಳಲ್ಲಿ ತಮ್ಮಲ್ಲಿನ ಉನ್ನತ ಕೌಶಲ್ಯಗಳು ಅಥವಾ ಸಾಮರ್ಥ್ಯದ ಆಧಾರದ ಮೇಲೆ ಮಕ್ಕಳು ನಿರ್ದಿಷ್ಟ ವಿಷಯಗಳನ್ನು ಆಯ್ಕೆ ಮಾಡಿಕೊಳ್ಳಲು ಸಾಧ್ಯ.

ಬೋಧನೆ ಒಂದು ಸಾರ್ವಜನಿಕ ಚಟುವಟಿಕೆ; ಶಿಕ್ಷಕರೊಬ್ಬರು ತರಗತಿಗೆ ಸಿದ್ಧವಾಗಬಹುದು, ಏನನ್ನು ಬೋಧಿಸಬೇಕು ಎಂಬುದನ್ನು ಆಯ್ಕೆ ಮಾಡಿಕೊಳ್ಳಬಹುದು, ಅದನ್ನು ಯೋಜಿಸಿಕೊಳ್ಳಬಹುದು, ಪುನರಾವರ್ತಿಸಬಹುದು ಪರೀಕ್ಷಿಸಬಹುದು, ಉತ್ತರ ಪತ್ರಿಕೆಯಲ್ಲಿ ಅಂಕ ನಮೂದಿಸಬಹುದು. ಆದರೆ ಕಲಿಕೆಯು ಒಂದು ಖಾಸಗಿ ಚಟುವಟಿಕೆ, ಅದು ನಡೆಯುವ ಸಮಯದಲ್ಲಿ ಅದನ್ನು ಗಮನಿಸಲು ಸಾಧ್ಯವಿಲ್ಲ. ಅಲ್ಲದೆ ಅದು ಅನಿರೀಕ್ಷಿತವಾಗಿ ಸಂಭವಿಸುವ ಸಂಗತಿಯಾಗಿದ್ದು, ಅನಿರೀಕ್ಷಿತ ಫಲಿತಾಂಶಗಳನ್ನು ನೀಡುತ್ತದೆ. ಕಲಿಕೆಯು ಬೋಧನೆಯ ಅನುಪಸ್ಥಿತಿಯಲ್ಲಿಯೂ ಆಗಬಲ್ಲದು: ಮಗು ನಡೆಯಲು ಕಲಿಯುತ್ತದೆ ಎಂದು ನಾವು ಹೇಳುತ್ತೇವೆ, ಆದರೆ ನಾವು ಪಕ್ಷಿಗಳಿಗೆ ಹಾರಾಡುವುದನ್ನು ಮತ್ತು ಮೀನಿಗೆ ಈಜುವುದನ್ನು ಕಲಿಸದಿರುವ ಹಾಗೆಯೇ ಮಕ್ಕಳಿಗೆ ನಾವು ನಡೆಯುವುದನ್ನು ಗಂಭೀರವಾಗಿ ಕಲಿಸುವುದಿಲ್ಲ.

ಅದೇ ರೀತಿ, ಮಕ್ಕಳು ಮಾತನಾಡುವುದನ್ನು "ಕಲಿಯುತ್ತದೆ" ಎಂದು ನಾವು ಹೇಳುತ್ತೇವೆ, ಆದರೆ ನಾವು ಮಾತಿಗೆ ಹಾಗನ್ನುತ್ತೇವೆ ಅಷ್ಟೇ:: ಸೂರ್ಯ ಪೂರ್ವದಲ್ಲಿ "ಉದಯಿಸುವ" ಮತ್ತು ಪಶ್ಚಿಮದಲ್ಲಿ "ಅಸ್ತವಾಗುವ" ಹಾಗೆ ಮಗುವಿನಲ್ಲೂ ಸಹ ಮಾತು ಸಹಜವಾಗಿ ಸಂಭವಿಸುತ್ತದೆ. ಸೂರ್ಯ ಉದಯಿಸುವ ಹಾಗೆ ಗೋಚರಿಸುತ್ತಾನೆ ಮತ್ತು ಮಗು ಭಾಷೆಯನ್ನು ಕಲಿಯುತ್ತಿರುವ ಹಾಗೆ ಗೋಚರಿಸುತ್ತದೆ. ಆದರೆ ವಾಸ್ತವದಲ್ಲಿ ಮಗು ಭಾಷೆಯನ್ನು ಮರು ಸೃಷ್ಟಿಸುತ್ತದೆ, ಅದನ್ನು ಒಂದು ರೀತಿಯಲ್ಲಿ ಮರು ಅನ್ವೇಷಿಸುತ್ತದೆ, ಅದರ ಅರ್ಥವನ್ನು ಅಭಿವ್ಯಕ್ತಿಸುತ್ತದೆ. ಒಂದು ಮಗು ಚಿತ್ರವೊಂದನ್ನು ವರ್ಣಿಸುತ್ತಾ ಹೀಗೆ ಬರೆಯುತ್ತದೆ. "The lion is afraiding the man" (ಸಿಂಹ ಮನುಷ್ಯನನ್ನು ಹೆದರಿಸುತ್ತಿದೆ). ಇದು ಪ್ರಮಾಣಿತ ಇಂಗ್ಲಿಷ್ ಅಲ್ಲ ಎನ್ನುವುದೇನೋ ನಿಜ, ಆದರೆ ಅದನ್ನು ಮಗು ಮುಂದೆ ಎಂದಾದರೂ ಅರ್ಥಮಾಡಿಕೊಳ್ಳುತ್ತದೆ ಎನ್ನುವ ನಂಬಿಕೆ ನಮಗಿದೆ. ಅಂದರೆ ಮಗು ಅಗತ್ಯವಾದಾಗ ತನಗೆ ಬೇಕಾದ ಕ್ರಿಯಾಪದವನ್ನು ಅನ್ವೇಷಿಸುತ್ತದೆ. ಒಂದನೇ ತರಗತಿಯಲ್ಲಿ ಇಂಗ್ಲಿಷ್ ಅನ್ನು ದ್ವಿತೀಯ ಭಾಷೆಯಾಗಿ ಕಲಿಯುತ್ತಿರುವ ಈ ಮಗು ವಾಸ್ತವವಾಗಿ ಇಂಗ್ಲಿಷ್ ಅನ್ನು ಮಾತೃಭಾಷೆಯಾಗಿ ಕಲಿಯುತ್ತಿರುವ ಮೂರರಿಂದ ಐದು ವರ್ಷದ ಮಗುವಿನ ಹಾಗೆಯೇ ಅನ್ವೇಷಿಸುತ್ತದೆ: ಆ ಮಕ್ಕಳು "Don't make me giggle" (ನನ್ನನ್ನು ಗಹಗಹಿಸುವಂತೆ ಮಾಡಬೇಡ) ಎಂದು ಹೇಳುವ ಬದಲು "Don't giggle me", ಎಂದೂ, "She made it go there" (ಅವಳು ಅದನ್ನು ಅಲ್ಲಿಗೆ ಹೋಗುವ ಹಾಗೆ ಮಾಡಿದಳು) ಎನ್ನುವ ಬದಲಾಗಿ "She goed it there," ಎಂದೂ ಹೇಳುತ್ತದೆ. ಮಗು ಕೆಲವೊಮ್ಮೆ ಸಂಪೂರ್ಣವಾಗಿ ಒಪ್ಪಬಹುದಾದ ಇಂಗ್ಲಿಷ್ ಎನ್ನುವಂತಹ ಸಾಧ್ಯತೆಗಳನ್ನು ಅನ್ವೇಷಿಸುತ್ತದೆ, ಆದರೆ ಅದು ನಾವು ಬೋಧಿಸುತ್ತಿರುವ "ಅಂಶ" ಆಗಿಲ್ಲದೆಯೇ ಇರಬಹುದು.

ಮನಸ್ಸಿನಲ್ಲಿ ಭಾಷೆಯು ಬೆಳೆಯಬೇಕಾದರೆ ನಾವು ಮಗುವಿಗೆ ಅರ್ಥಪೂರ್ಣವಾದ ಸಂದೇಶಗಳನ್ನು ಒದಗಿಸಬೇಕು. ನಮ್ಮ ಕಥೆಯಲ್ಲಿರುವ ಮಗು ನಿರೀಕ್ಷಿಸುತ್ತಿರುವುದೂ ಅದನ್ನೇ. "ನನಗೆ ಎರಡು ಕೈ ಹಾಗೂ ಹತ್ತು ಬೆರಳುಗಳಿವೆ" ಎಂದು ಶಿಕ್ಷಕರು ಹೇಳಿದಾಗ ಶಿಕ್ಷಕರು ಮಕ್ಕಳೊಂದಿಗೆ "ನನ್ನ ಬಳಿ ನಾಯಿ ಇದೆ, ನನಗೆ ಹಣ್ಣಿನ ರಸ ಇಷ್ಟ, ನನಗೆ ಹಸಿವಾಗಿದೆ…" ಎನ್ನುವ ಹಾಗೆಯೇ ತಮ್ಮ ಖಾಸಗಿ ವಿವರಗಳನ್ನು ಹಂಚಿಕೊಳ್ಳುತ್ತಿದ್ದಾರೆ ಎಂದು ಮಗು ಭಾವಿಸಿದೆ. ಮಗು ಸಹಜವಾಗಿ ಅರ್ಥಕ್ಕಾಗಿ ಹುಡುಕುತ್ತದೆ: ಆದರೆ ಕೇವಲ ಅದಕ್ಕೋಸ್ಕರ ಭಾಷೆಯನ್ನು ಅಭ್ಯಾಸ ಮಾಡುವುದರಲ್ಲಿ (ಆಟ ಅಥವಾ ಹಾಡುಗಳು ಅಥವಾ ನಾಟಕವನ್ನು ಹೊರತುಪಡಿಸಿ) ಮಗುವಿಗೆ ಯಾವುದೇ ಅರ್ಥ ಗೋಚರಿಸುವುದಿಲ್ಲ. ಹಾಗಾಗಿ ಪ್ರಾಥಮಿಕ ಶಾಲೆಯಲ್ಲಿ ಭಾಷೆಯನ್ನು ಕಲಿಸಲು ಬಹಳ ಸುಲಭವಾದ ಮಾರ್ಗವಿದೆ: ಹಾಡುಗಳು, ಕಥೆಗಳು, ಕವಿತೆಗಳು ಮತ್ತು ನಾಟಕಗಳು, ಇತ್ಯಾದಿ. ಲಯವು ಭಾಷೆಯನ್ನು ಸ್ಮರಣೀಯವಾಗಿಸುತ್ತದೆ; ಕಥೆಗಳು ಮಕ್ಕಳ ಆಸಕ್ತಿಯನ್ನು ಹಿಡಿದಿಡುತ್ತವೆ; ಮತ್ತು ಆ ಮೂಲಕ ಭಾಷೆಯನ್ನು ಯಾವುದೇ ಒತ್ತಡ ಅಥವಾ ಶ್ರಮವಿರದೆ ಕಲಿಯಬಹುದಾಗಿದೆ. ಇದಕ್ಕೆ ಸಂಬಂಧಿಸಿದಂತೆ ಇತರ ದೇಶಗಳಲ್ಲಿ ಸಾಕಷ್ಟು ಸಂಶೋಧನೆಗಳು ನಡೆದಿವೆ ಹಾಗೂ ಭಾರತದಲ್ಲಿ ಮಕ್ಕಳಿಗೆ ಭಾಷೆಯನ್ನು ಕಲಿಸುವಲ್ಲಿ ಮತ್ತು ಜಗತ್ತಿನ ಬಗ್ಗೆ ಯೋಚಿಸುವಂತೆ ಮಾಡುವಲ್ಲಿ ಕಥೆ ಹೇಳುವಿಕೆಯನ್ನು ಒಂದು ವಿಧಾನವಾಗಿ ಬಳಸುವ ಕುರಿತು ಕೆಲವು ಸಂಶೋಧನೆಗಳು ನಡೆದಿವೆ.

ಆಲಿಸುವಿಕೆ ಮತ್ತು ಮಾತನಾಡುವಿಕೆಯ ಕುರಿತೇ ಸಾಕಷ್ಟು ಚರ್ಚಿಸಲಾಗಿದೆ. ಹಾಗಾದರೆ ಓದುವಿಕೆ, ಬರವಣಿಗೆ ಮತ್ತು ಕಾಗುಣಿತಾಕ್ಷರಗಳ ವಿಷಯ? ಇದರಲ್ಲಿಯೂ ಮಗು ಕಲಿಯುವಂತೆ ನಟಿಸುವ ಹಾಗೂ ತಾನಾಗಿ ಶೋಧಿಸುವಂತಹ ಪ್ರಯತ್ನಗಳ ಹಲವು ಹಂತಗಳಿರುವಂತೆ ಕಾಣುತ್ತದೆ. ಇವುಗಳಲ್ಲಿನ "ತಪ್ಪುಗಳನ್ನು" ದೊಡ್ಡವರು ಕಲಿಯುವ ವಿಧಾನಕ್ಕೆ ಹತ್ತಿರವಾದ ಪ್ರಯತ್ನಗಳಾಗಿ ಕಂಡುಬಂದಲ್ಲಿ ಅವುಗಳನ್ನು ತಪ್ಪುಗಳೆಂದು ಭಾವಿಸದೇ ಕಲಿಕೆಯ ನಿದರ್ಶನಗಳೆಂದು ಪರಿಗಣಿಸಬಹುದಾಗಿದೆ. ಪ್ರತಿಯೊಬ್ಬ ಶಿಕ್ಷಕರೂ ಕಲಿಕೆಯ ಪುರಾವೆ ಅಥವಾ ಸಾಕ್ಷಿಗಳನ್ನು ಹುಡುಕುತ್ತಿರುತ್ತಾರೆ: ಅವನ್ನು ತಮ್ಮ ಬೋಧನೆಗೆ ದೊರೆತ ಪ್ರತಿಕ್ರಿಯೆಗಳೆಂದು ಭಾವಿಸುತ್ತಾರೆ. ಅಲ್ಲದೇ ಅವನ್ನು ತಮ್ಮ ಬೋಧನೆಯ ದಾಖಲೆಯಾಗಿ ಪ್ರಾಂಶುಪಾಲರು ಅಥವಾ ಪೋಷಕರಿಗೆ ತೋರಿಸಲು ಬಯಸುತ್ತಾರೆ. ಆದರೆ ಮಾನಸಿಕ ಚಟುವಟಿಕೆ ಅಥವಾ ಪಾಲ್ಗೊಳ್ಳುವಿಕೆ ಇಲ್ಲದೆ ಕೇವಲ ದೊಡ್ಡವರ ಕಾರ್ಯವನ್ನು ಯಥಾವತ್ತಾಗಿ ನಕಲು ಮಾಡುವುದು ಕಲಿಕೆಗೆ ಸಾಕ್ಷಿಯಾಗುವುದಿಲ್ಲ. ಹಾಗಾಗಿ ಮಗು ಮಾಡುವ ಯಾವುದೇ ತಪ್ಪಿರದ ಕಾರ್ಯಚಟುವಟಿಕೆ ನಿಜವಾದ ಕಲಿಕೆಯ ನಿದರ್ಶನವಲ್ಲ. "ಟೀಚರ್" ಎಂಬ ಪದಕ್ಕೆ "tchr" ಎಂಬ ಅಕ್ಷರಗಳ ಸಂಯೋಜನೆಯನ್ನು ತಾನಾಗಿ ಶೋಧಿಸಬಲ್ಲ ಮಗು ಇಂಗ್ಲಿಷ್ ಭಾಷೆಯ ಅಕ್ಷರಗಳು ಮತ್ತು ಅಕ್ಷರಗಳಿಗಿರುವ ತಮ್ಮದೇ ಆದ ಧ್ವನಿಗಳ ಅರಿವನ್ನು ತೋರಿಸುತ್ತಿರುತ್ತದೆ. ಓದುವಂತೆ ಪ್ರಯತ್ನಿಸುತ್ತಿರುವ ಮಗು ಪುಸ್ತಕದ ಪುಟದಲ್ಲಿ ಭಾಷೆಯಾಗಿ ಮಾತನಾಡಬಲ್ಲ ಸಂಕೇತಗಳು ಇವೆ ಎನ್ನುವುದನ್ನು ಅರಿತಿರುತ್ತದೆ. ಓದುವಿಕೆಗೆ ಸಂಬಂಧಿಸಿದ ಸಂಶೋಧನೆಗಳು ಹಲವು ವೈರುಧ್ಯಗಳನ್ನು ನಮ್ಮ ಮುಂದೆ ತೆರೆದಿಟ್ಟಿವೆ: ಅವೆಂದರೆ ಮಗು ಯಾವುದೇ ತಪ್ಪಿರದೆ ಸರಾಗವಾಗಿ ಓದುತ್ತಿರುವಂತೆ ನಟಿಸುತ್ತಾ ಗಿಳಿಪಾಠ ಒಪ್ಪಿಸುತ್ತದೆಯೇ ಹೊರತು ನಿಜವಾಗಿಯೂ ಓದುತ್ತಿರುವುದಿಲ್ಲ. (ಇದು ನರ್ಸರಿ ಪ್ರಾಸಗೀತೆಗಳ ಪುಸ್ತಕವನ್ನು ಹೊಂದಿರುವ ಮೂರು ವರ್ಷದ ಮಗು ಇರಬಹುದು) ಮಗು ತಾನೇ ಸ್ವತಂತ್ರವಾಗಿ ಓದಲು ಪ್ರಯತ್ನಿಸಿದಾಗ ಅದರ ಓದುವ ವೇಗ ನಿಧಾನವಾಗುತ್ತದೆ ಮತ್ತು ತಪ್ಪುಗಳು ಸಂಭವಿಸುತ್ತವೆ. ಏಕೆಂದರೆ ಈಗ ಮಗು ನಿಜವಾಗಿಯೂ ಸ್ವತಂತ್ರವಾಗಿ ಓದಲು ಆರಂಭಿಸಿದೆ. ಶಿಕ್ಷಕರಿಂದ ಸಹಾಯದ ಮೂಲಕ, ನಿರಂತರವಾಗಿ ಓದುವ ಪ್ರಯತ್ನ ಮಾಡುವ ಮೂಲಕ, ಶಿಕ್ಷಕರು ಮಗುವಿಗೆ ಕೇಳಿಸುವಂತೆ ಓದುವ ಮೂಲಕ ಮಗು ಓದುವುದನ್ನು ಕಲಿಯುತ್ತದೆ. ಆದರೆ ಓದುವಂತೆ ನಟಿಸುವ ಹಂತದಿಂದ ನಿಜವಾಗಿಯೂ ಓದುವ ಹಂತಕ್ಕೆ ಪರಿವರ್ತನೆಯಾಗುವುದನ್ನು ಬಹಳ ಎಚ್ಚರಿಕೆಯಿಂದ ಮಾಡಬೇಕಾಗುತ್ತದೆ. ಆದರೆ ಸಮಸ್ಯೆ ಇರುವುದು ಮಗು ಓದುತ್ತಿರುವಂತೆ ಅಥವಾ ಬರೆಯುತ್ತಿರುವಂತೆ ನಟಿಸುವುದರಲ್ಲಲ್ಲ.

ನಿಜವಾದ ಸಮಸ್ಯೆ ಇರುವುದು ಬಹಳಷ್ಟು ಬಾರಿ ಶಿಕ್ಷಕರು ಮತ್ತು ಶಾಲೆಗಳು ಹೀಗೆ ಓದುವಂತೆ ನಟಿಸುತ್ತಿರುವುದು, ಹಾಗೂ ನಿಜವಾಗಿ ಓದುವುದರ ನಡುವಿನ ವ್ಯತ್ಯಾಸವನ್ನು ಪತ್ತೆಹಚ್ಚುವಲ್ಲಿ ವಿಫಲವಾಗಿರುವುದು. ಮಗುವಿಗೆ ಕಪ್ಪುಹಲಗೆಯಿಂದ ಪ್ರಶ್ನೆ ಮತ್ತು ಉತ್ತರಗಳನ್ನು ನಕಲು ಮಾಡಿಕೊಳ್ಳುವಂತೆ ಹೇಳಲಾಗುತ್ತದೆ: ಇದನ್ನು ಬರವಣಿಗೆ ಎಂದು ಕರೆಯಲಾಗುತ್ತದೆ. ಈ ಸಂದರ್ಭದಲ್ಲಿ ಮಗು ಅಕ್ಷರಗಳನ್ನು ಒಂದೊಂದಾಗಿ ನಕಲು ಮಾಡಿ ಬರೆಯುತ್ತದೆಯೇ ಹೊರತು ಅದರ ಅರ್ಥಕ್ಕೆ ಯಾವುದೇ ಗಮನ ನೀಡದಿರುವುದನ್ನು ನೋಡಬಹುದಾಗಿದೆ. ಆದರೆ ಈ ಹಿಂದೆ ಮಗು ಸ್ವಾಭಾವಿಕವಾಗಿ ಅರ್ಥಕ್ಕೆ ಗಮನ ನೀಡುತ್ತದೆ ಎಂದು ನಾವು ಹೇಳಿದ್ದೇವೆ. ಹಾಗಾದರೆ ತಪ್ಪಾಗಿರುವುದು ಏನು? ಎಲ್ಲಿ?

ಬೋಧಿಸುವ ಮತ್ತು ಬೋಧಿಸಿದುದಕ್ಕೆ ಸಾಕ್ಷಿಗಳನ್ನು ಸಂಗ್ರಹಿಸುವ ನೆವದಲ್ಲಿ ನಾವು ಮಗುವಿನ ಮನಸ್ಸಿನ ಸ್ವಾಭಾವಿಕ ಕಲಿಕಾ ಮಾರ್ಗಗಳಿಗೆ ಅಡ್ಡಿಯನ್ನು ಉಂಟುಮಾಡುತ್ತಿರಬಹುದು. ಇದನ್ನು ನಿದರ್ಶನವೊಂದರ ಮೂಲಕ ಅರ್ಥ ಮಾಡಿಕೊಳ್ಳೋಣ. ಕೆಲವು ಜನರಿಗೆ ನಡುಮನೆಯ ಚಿತ್ರವೊಂದನ್ನು ಕೊಟ್ಟು ಅದನ್ನು ಒಂದು ನಿಮಿಷದ ಕಾಲ ವೀಕ್ಷಿಸಲು ಹೇಳಲಾಯಿತು. ಅದರಲ್ಲಿನ ಒಂದು ಗುಂಪಿಗೆ ಚಿತ್ರದಲ್ಲಿ ಕೆಲವು ಸಂಕೇತಗಳನ್ನು ಗುರುತು ಮಾಡಿರುವುದಾಗಿಯೂ ಅವರು ಅದನ್ನು ಪತ್ತೆಹಚ್ಚಬೇಕೆಂದೂ ಹೇಳಲಾಯಿತು. ಇನ್ನೊಂದು ಗುಂಪಿಗೆ ಚಿತ್ರವನ್ನು ಅಡ್ಡವಾಗಿ ಅಥವಾ ಉದ್ದವಾಗಿ ನೋಡಿ ಪತ್ತೆಹಚ್ಚಬೇಕೆಂದೂ ಮತ್ತೊಂದು ಗುಂಪಿಗೆ ವಸ್ತುಗಳ ರೂಪುರೇಷೆಗಳನ್ನು ಗಮನಿಸಿ ಪತ್ತೆಹಚ್ಚಬೇಕೆಂದೂ ಹೇಳಲಾಯಿತು. ಆದರೆ ವಾಸ್ತವದಲ್ಲಿ ಚಿತ್ರದಲ್ಲಿ ಯಾವುದೇ ಸಂಕೇತಗಳು ಇರಲಿಲ್ಲ. ಎರಡನೇ ಗುಂಪಿನಲ್ಲಿನ ಒಂದು ಸಣ್ಣಗುಂಪಿಗೆ ಚಿತ್ರದಲ್ಲಿರುವ ವಸ್ತುಗಳನ್ನು ಬಳಸಿ ಮಾಡಬಹುದಾದ ಚಟುವಟಿಕೆಗಳನ್ನು ಪಟ್ಟಿ ಮಾಡಲು ಹೇಳಿದರೆ ಮತ್ತೊಂದು ಸಣ್ಣ ಗುಂಪಿಗೆ ಆ ವಸ್ತುಗಳ ಮಾನಸಿಕ ಚಿತ್ರವನ್ನು ರೂಪಿಸಿಕೊಳ್ಳಲು ಹೇಳಲಾಯಿತು. ಒಂದು ನಿಮಿಷದ ನಂತರ ಮೊದಲನೇ ಗುಂಪಿನ ಜನ ಚಿತ್ರದಲ್ಲಿನ ಮೂರರಿಂದ ಎಂಟು ವಸ್ತುಗಳ ಹೆಸರನ್ನು ನೆನಪಿಸಿಕೊಂಡು ಹೇಳಿದರು. ಎರಡನೇ ಗುಂಪು 25 ರಿಂದ 32 ವಸ್ತುಗಳ ಹೆಸರುಗಳನ್ನು ನೆನಪಿಸಿಕೊಂಡರು.

ಎರಡೂ ಗುಂಪುಗಳಿಗೂ ನೀಡಲಾದ ಪ್ರಚೋದನೆ ಒಂದೇ, ನೀಡಲಾದ ಸಮಯವೂ ಒಂದೇ ಹಾಗೂ ಜನರನ್ನು ಆಯ್ಕೆ ಮಾಡಿಕೊಂಡ ವಿಧಾನವು ಒಂದೇ ಆಗಿತ್ತು. ಹಾಗಾದರೆ ಫಲಿತಾಂಶದ ಮೇಲೆ ಪರಿಣಾಮ ಬೀರಿದ ಅಂಶವೇನು? ಜನಗಳಿಗೆ ನೀಡಲಾದ ವಿಭಿನ್ನ ನಿರ್ದೇಶನಗಳು ವಿಭಿನ್ನ ಮಾನಸಿಕ ಚಟುವಟಿಕೆಗಳನ್ನು ಪ್ರಚೋದಿಸಿದವು. ಮೊದಲನೇ ಗುಂಪು ಸಂಕೇತಗಳನ್ನು ಹುಡುಕುವಲ್ಲಿ ನಿರತವಾಯಿತು. ಎರಡನೇ ಗುಂಪು ಚಿತ್ರದಲ್ಲಿನ ವಸ್ತುಗಳನ್ನು ನೋಡಿ ಅವುಗಳ ಬಗೆಗೆ ಆಲೋಚಿಸಿತು. ಹಾಗಾಗಿ ಕಲಿಕೆಯು ಆಂತರಿಕವಾದರೂ ನಾವು ಬೋಧಿಸುವ ರೀತಿಯು ಮಾನಸಿಕ ಚಟುವಟಿಕೆಯನ್ನು ಪ್ರಭಾವಿತಗೊಳಿಸುತ್ತದೆ.

ಮಾನಸಿಕ ಚಟುವಟಿಕೆಯನ್ನು ಉತ್ತೇಜಿಸುವುದು ಹೇಗೆ? ಇದನ್ನರಿಯಲು ನಾವು ಮೊದಲು ಮಾನಸಿಕ ಚಟುವಟಿಕೆಯನ್ನು ಅರ್ಥಮಾಡಿಕೊಳ್ಳಬೇಕು. ಕಲಿಕೆ ಮತ್ತು ನೆನಪಿನಲ್ಲಿ ಹಲವು ಹಂತಗಳಿವೆ. ಮೊದಲು ನಾವು ಯಾವುದನ್ನೇ ಆದರೂ ಗ್ರಹಿಸಬೇಕು ಅಥವಾ ಅದರತ್ತ ಗಮನ ನೀಡಬೇಕು. ಆನಂತರ ಅದನ್ನು ನಮ್ಮ ನೆನಪಿಗೆ ಸೇರಿಸಬೇಕು. ಆನಂತರ ಅದನ್ನು ನಮಗೆ ಅಗತ್ಯಬಿದ್ದಾಗ ನೆನಪಿಸಿಕೊಳ್ಳಲು ಸಾಧ್ಯವಾಗಬೇಕು! (ನಾವೆಲ್ಲ "ನಾಲಿಗೆಯ ತುದಿಯಲ್ಲೇ ಇದೆ" ಎಂಬ ಮಾತನ್ನು ಆಗಾಗ ಆಡುತ್ತಿರುತ್ತೇವೆ: ನಮಗೇನೋ ಗೊತ್ತಿರುತ್ತದೆ; ಆದರೆ ಅದು ತಕ್ಷಣಕ್ಕೆ ನೆನಪಿಗೆ ಬರುವುದಿಲ್ಲ.)

ಗ್ರಹಿಸುವಿಕೆ ಅಥವಾ ಗಮನಿಸುವ ಮೊದಲ ಹಂತದ ಕುರಿತಾದ ಸಂಶೋಧನೆಗಳು ಸ್ಪಷ್ಟಪಡಿಸುವ ಅಂಶವೆಂದರೆ ಗ್ರಹಿಕೆ ಅಥವಾ ಪರಿಕಲ್ಪನೆಯಲ್ಲಿ ಅರ್ಥಪೂರ್ಣ ಅಂಶಗಳಿಗೆ ಗಮನ ನೀಡುವಂತೆ ನಿರ್ದೇಶಿಸುವುದು ಅಗತ್ಯ. ಅದು ಈ ಮೇಲೆ ನೀಡಲಾದ ಪ್ರಯೋಗದ ವಿವರಗಳಿಂದ ನಮಗೆ ಸ್ಪಷ್ಟವಾಗಿದೆ.

ನಮ್ಮ ಸೂಚನೆಗಳು ಅಥವಾ ಪ್ರಶ್ನೆಗಳನ್ನು ಆಧರಿಸಿ ನಾವು ನೀಡಿದ ಪ್ರಚೋದನೆಗೆ ಪ್ರತಿಕ್ರಿಯಿಸಲು ನಮ್ಮ ವಿದ್ಯಾರ್ಥಿಗಳು ವಿವಿಧ ಪ್ರಮಾಣದ ಸಮಯವನ್ನು ವ್ಯಯಿಸುತ್ತಾರೆ. ಕೆಲವು ಪ್ರಶ್ನೆಗಳು ಇತರ ಪ್ರಶ್ನೆಗಳಿಗಿಂತ ಹೆಚ್ಚು ಅರ್ಥಪೂರ್ಣವಾಗಿವೆಯೋ? ಹೌದು.

ಉದಾಹರಣೆಗೆ ನಾವು "ಬಿಟ್ಟ ಸ್ಥಳವನ್ನು ತುಂಬಿ" (ಫಿಲ್ ಇನ್ ದ ಬ್ಲ್ಯಾಂಕ್ಸ್)ಅಂತಹ ಚಟುವಟಿಕೆಯನ್ನು ತೆಗೆದುಕೊಳ್ಳೋಣ. ಬಿಟ್ಟ ಸ್ಥಳದ ವಾಕ್ಯವು ಸಂರಚನೆಯ ದೃಷ್ಟಿಯಿಂದ ಸಂಕೀರ್ಣವಾಗಿದ್ದರೆ ವಾಕ್ಯದ ಬದಲಿಗೆ ಒಂದು ಪದವನ್ನು ನೆನಪಿಟ್ಟುಕೊಳ್ಳಲಾಗುತ್ತದೆ. ಹಾಗಾಗಿ, ಪುಟ್ಟ ಹೆಂಗಸು ಕೋಪದಿಂದ ಕೆಂಪು . . . . . . . . . ಅನ್ನು ಎತ್ತಿಕೊಂಡಳು" ಎನ್ನುವ ವಾಕ್ಯವು "ಹಣ್ಣಾಗಿರುವ . . . . . . . . . ಬಹಳ ರುಚಿಯಾಗಿರುತ್ತದೆ" ಎನ್ನುವುದಕ್ಕಿಂತ ಹೆಚ್ಚು ಸಂಕೀರ್ಣವಾದದ್ದು. ಈ ಸಂದರ್ಭದಲ್ಲಿ ಗಮನಿಸಬೇಕಾದ ಮಾತೊಂದಿದೆ: ಮಕ್ಕಳಿಗೆ ಅರ್ಥವಾಗದ ಸಂಕೀರ್ಣ ವಾಕ್ಯಗಳನ್ನು ಸುಮ್ಮನೆ ನೀಡುವುದರಿಂದ ಯಾವುದೇ ಪ್ರಯೋಜನವಿಲ್ಲ. ಹಾಗೆಯೇ ಅತೀ ಸರಳೀಕರಣವೂ ಸಲ್ಲದು. ಸರಳವಾಗಿದ್ದರೆ ಮಕ್ಕಳು ಸರಿ ಉತ್ತರವನ್ನು ಸುಲಭವಾಗಿ ಗ್ರಹಿಸುತ್ತಾರೆಂಬ ಕಾರಣಕ್ಕೆ ಒಂದು ವಾಕ್ಯವನ್ನು ಅರ್ಥವೇ ಇಲ್ಲದಷ್ಟು ಸರಳವಾಗಿಸಿಬಿಟ್ಟರೆ ಅಂತಹ ವಾಕ್ಯವನ್ನು ಯಾರು, ಏತಕ್ಕಾಗಿ ಬಳಸುತ್ತಾರೆ ಎಂಬುದು ಮಕ್ಕಳಿಗೆ ಅರ್ಥವಾಗುವುದಿಲ್ಲ. ಆ ಹಂತದಲ್ಲಿ ಮಕ್ಕಳು ಅಂತಹ ವಾಕ್ಯಗಳ ಕಡೆಗೆ ಗಮನ ನೀಡುವುದನ್ನೇ ನಿಲ್ಲಿಸುತ್ತಾರೆ.

ಅಂತಿಮವಾಗಿ, ವೈಯಕ್ತಿಕ ಸಂಬಂಧೀಕರಣದ ಕುರಿತಾಗಿ ಒಂದು ಮಾತು. ಪಿಎಚ್.ಡಿ. ವಿದ್ಯಾರ್ಥಿಯೊಬ್ಬರು ಇತರ ವಿಷಯಗಳನ್ನು ಕುರಿತು ಅಷ್ಟೇನೂ ಚೆನ್ನಾಗಿ ಬರೆಯದ ಒಂದು ಮಗುವಿಗೆ ತನ್ನನ್ನು ಕುರಿತು ಬರೆಯಲು ಹೇಳಿದಾಗ ಆ ಮಗು ಉತ್ತಮವಾಗಿ ಬರೆಯುವುದನ್ನು ಗಮನಿಸಿದರು.

ಬಹುಶಃ ಭಾಷಾ ಕಲಿಕೆಯೂ ಸೇರಿದಂತೆ ಇದು ಎಲ್ಲ ಕಲಿಕೆಗಳ ಹಿಂದಿನ ರಹಸ್ಯವಾಗಿದೆ. ಒಂದು ಸಂಗತಿಯು ವೈಯಕ್ತಿಕವಾಗಿ ನಮಗೆ ಸಂಬಂಧಿಸಿದ್ದಾಗಿದೆಯೇ ಎಂಬುದೇ ಕಲಿಕೆಯ ರಹಸ್ಯವಾಗಿದೆ. ಅಂದ ಮೇಲೆ ಕಲಿಕೆಯು ಪ್ರತಿಯೊಂದು ಮಗುವಿಗೆ ಆದಷ್ಟೂ ವೈಯಕ್ತಿಕ ಸಂಗತಿಯಾಗಿರುವಂತೆ ನೋಡಿಕೊಳ್ಳುವುದು ಪ್ರಾಥಮಿಕ ಶಾಲೆಯ ಆದ್ಯ ಕರ್ತವ್ಯವಾಗಿದೆ: ಶಾಲಾ ತರಗತಿಯಲ್ಲಿ ಮನೆಯ ವಾತಾವರಣ ತರಬೇಕಾಗಿದೆ, ಆಟದ ಮೈದಾನ ಮಗುವಿನ ಅಪೇಕ್ಷೆಗೆ ಅನುಗುಣವಾಗಿರುವಂತೆ ನೋಡಿಕೊಳ್ಳಬೇಕಾಗಿದೆ. ಹಾಗಾದಾಗ ಮಗು ಸ್ವಾಭಾವಿಕವಾಗಿ ಬೆಳೆಯಲು ಮತ್ತು ಕಲಿಯಲು ಸಾಧ್ಯವಾಗುತ್ತದೆ. ಮಗುವನ್ನು ಒಬ್ಬ ಅಪರಿಪೂರ್ಣ ಪ್ರೌಢವ್ಯಕ್ತಿಯ ಹಾಗೆ ನೋಡತೊಡಗಿದಾಗ ಮಗು ಮಾಡಲು ಸಂತೋಷಿಸುವ ಯಾವುದೇ ಚಟುವಟಿಕೆಯನ್ನು ನಾವು ಅನುಮಾನ ದೃಷ್ಟಿಯಿಂದ ನೋಡುವಂತೆ ಮಾಡುತ್ತದೆ. ಆಗ ಶಾಲಾ ಕೊಠಡಿಯನ್ನು ಮನೆ ಮತ್ತು ಆಟದ ಮೈದಾನದಿಂದ ಎಷ್ಟು ಸಾಧ್ಯವೋ ಅಷ್ಟು ದೂರವಿಡಲು ಪ್ರಯತ್ನಿಸುವಂತೆ ಮಾಡುತ್ತದೆ. ಮತ್ತೊಂದು ದೃಷ್ಟಿಯಲ್ಲಿ ನೋಡುವುದಾದರೆ, ವಿಚಾರಗಳು ಮನಸ್ಸಿನ ಆಟದ ಮೈದಾನದಂತೆ. ಹಾಗಾಗಿ ಈ ಆಟದ ಮೈದಾನಕ್ಕೆ ಪ್ರತಿಯೊಂದು ಮಗುವಿಗೂ ಪ್ರವೇಶ ದೊರೆಯುವಂತೆ ಮಾಡುವುದು ನಮ್ಮ ಜವಾಬ್ದಾ ರಿಯಾಗಿದೆ.

***

**ಆಕರ ಗ್ರಂಥಗಳು:**


- Prabhu, N. S. n.d. "Teaching is hoping for the best." Unpublished ms.

- Amritavalli, R. 1998. “The pragmatic underpinnings of syntactic competences,” *Journal of Pragmatics* 29, 661-680.
- 1999. “Dictionaries are Unpredictable,” *ELT Journal* 53/4, 262-269. Essex, U.K.
- 1999. Language as a Dynamic Text: Essays on Language, Cognition and Communication. Hyderabad: CIEFLAkshara series.
- Howe, Michael J.A. 1984. *A Teacher's Guide to the Psychology of Learning*. Basil Blackwell.


*ಈ ಲೇಖನವು ಮೊದಲು NCERT ನವ ದೆಹಲಿ ಇವರು ಪ್ರಕಟಿಸಿದ “The Primary Teacher” ಪತ್ರಿಕೆಯ* Volume XXX Number 3-4, July and October 2005, ISSN 0970-9282 *ಸಂಚಿಕೆಯಲ್ಲಿ ಪ್ರಕಟಗೊಂಡಿದ್ದು ಶಬ್ನಮ್ ಸಿನ್ಹಾ ಅದರ ಶೈಕ್ಷಣಿಕ ಸಂಪಾದಕರಾಗಿದ್ದರು.*

**ಲೇಖಕಿ:**

**ಆರ್. ಅಮೃತವಲ್ಲಿ:** ಇವರು ಹೈದರಾಬಾದ್ ನ The English and Foreign Languages University ಯ Linguistics ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದು, ಪ್ರಾಯೋಗಿಕ ಭಾಷಾಶಾಸ್ತ್ರ ಮತ್ತು ಪ್ರಥಮ ಹಾಗೂ ದ್ವಿತೀಯ ಭಾಷಾ ಕಲಿಕೆಗೆ ಸಂಬಂಧಿಸಿದ ಕ್ಷೇತ್ರಗಳಲ್ಲಿ ವಿಶೇಷ ಆಸಕ್ತಿ ಹೊಂದಿದ್ದಾರೆ.

**Email:** amritavalli@gmail.com

**ಅನುವಾದಕರು:** ತಾ.ಶ್ರೀ. ಗುರುರಾಜ್.